# ಅಸ್ಸಾಂ ನರಮೇಧ

ಅಸ್ಸಾಮಿನಲ್ಲಿ ಹಿಂಸೆ ಅಡೆ ತಡೆಯಿಲ್ಲದೆ ಮುಂದುವರಿದಿದೆ. ಯಾರು, ಯಾರನ್ನು, ಯಾಕೆ ಕೊಲ್ಲುತ್ತಾರೆಂದು ಹೊರಗಿನ ನಮಗೆ ಅರ್ಥವಾಗದ ರೀತಿ ಕೊಲೆಗಳು, ಸಾಮೂಹಿಕ ಹತ್ಯೆಗಳು ನಡೆಯುತ್ತಿವೆ. ಆದರೆ ಚಳುವಳಿಗೆ ನಿಜವಾದ ಕಾರಣಗಳೇನು, ಅಸ್ಸಾಮಿಯರ ಬೇಡಿಕೆಗಳೇನು ಮುಂತಾದ ವಿಷಯಗಳ ಬಗ್ಗೆ ಹೆಚ್ಚು ಜನರಿಗೆ ಸ್ಪಷ್ಟ ತಿಳುವಳಿಕೆ ಇದ್ದಂತಿಲ್ಲ.

ಅಸ್ಸಾಮಿಯರು ಭಾರತದ ಇತರ ಜನಾಂಗಗಳಂತೆಯೇ ಒಂದು ಸ್ವತಂತ್ರ ಜನಾಂಗ. ಅವರಿಗೆ ತಮ್ಮದೇ ಆದ ಭಾಷೆ, ನಡೆನುಡಿ, ಇತಿಹಾಸ, ಸಂಸ್ಕೃತಿ, ವಿಶಿಷ್ಟ ಜೀವನ ಕ್ರಮ ಎಲ್ಲ ಇದ್ದು, ಅದನ್ನು ಅವರು ತೀವ್ರವಾಗಿ ಪ್ರೀತಿಸುತ್ತಾರೆ. ಅಸ್ಸಾಮಿನ ಪ್ರಕೃತಿ ಸಂಪತ್ತು ವಿಪುಲವಾಗಿದೆ. ಪೆಟ್ರೋಲಿಯಂ, ಟೀ, ರಬ್ಬರ್, ಹಲವಾರು ಖನಿಜಗಳು, ಸಮೃದ್ಧವಾದ ಕಾಡು, ಜೊತೆಗೆ ತಮಗೆ ಸಾಕಾಗುವಷ್ಟು ಆಹಾರ ಧಾನ್ಯ—ಎಲ್ಲ ಇಲ್ಲಿ ಇವೆ.

ಆದರೆ, ಭಾರತದ ಸ್ವಾತಂತ್ರ್ಯ ನಂತರ ಸುತ್ತ ಮುತ್ತಲ ರಾಜ್ಯಗಳವರು ಅಪಾರ ಸಂಖ್ಯೆಯಲ್ಲಿ ಇಲ್ಲಿಗೆ ವಲಸೆ ಬಂದು ಇಲ್ಲಿನ ಎಲ್ಲ ಸಂಪತ್ತಿಗೆ, ಸಂಪತ್ತಿನ ಮೂಲಗಳಿಗೆ 'ಒಡೆಯ'ರಾದರು; ಇತರರು ಅಸ್ಸಾಮಿನಾದ್ಯಂತ ಹರಡಿ ದುಡಿಯುವ ಜನರಾದರು. ಹೀಗೆ ಒಡೆಯರಾದವರಲ್ಲಿ ಬಂಗಾಲಿಗಳದು ಮೇಲುಗೈ. ಕ್ರಮೇಣ ಹೊರಗಿನವರ ಪ್ರಭಾವದಿಂದಾಗಿ ಅಸ್ಸಾಮಿಗಳ ಪ್ರಿಯವಾದ ಸಂಸ್ಕೃತಿ ಅಳಿಸಿ ಹೋಗುವ ಅಪಾಯಕ್ಕೆ ಸಿಕ್ಕಿತು. ಜೊತೆಗೆ ತಮ್ಮ ನಾಡಲ್ಲಿ ತಾವೇ ಅಲ್ಪ ಸಂಖ್ಯಾತರಾಗುವಂತಾಯಿತು. ಎಲ್ಲ ಸಂಪತ್ತು, ವಿದ್ಯೆಯ ಅವಕಾಶ, ನೌಕರಿ, ಸವಲತ್ತು ಎಲ್ಲವೂ ಪಾಂಡಿತ್ಯ, ಅರ್ಹತೆ, ಕುಶಲತೆಗಳ ನೆಪದಲ್ಲಿ ಈ ಹೊರಗಿನವರಿಗೇ ಕೈವಶವಾಗುತ್ತ ಬಂತು. ಇವರು ಸ್ಥಳೀಯರನ್ನು ತುಚ್ಛವಾಗಿ ಕಾಣುವುದರ ಜೊತೆಗೆ ಅವರ ಬೆಳವಣಿಗೆಯ ದಾರಿಗೆ ಅಡ್ಡವಾದರು.

ಅಸ್ಸಾಮಿನ ಅಪಾರ ಸಂಪತ್ತೆಲ್ಲ ಅಲ್ಲಿಂದ ಹೊರಗೆ ಹರಿಯುತ್ತಿದೆ, ಅಸ್ಸಾಮಿನ ಬೆಳವಣಿಗೆಗೆ ವಿನಿಯೋಗವಾಗುತ್ತಿಲ್ಲ. ಉದಾಹರಣೆಗೆ ದೇಶದ ಪೆಟ್ರೋಲಿಯಂ ಉತ್ಪಾದನೆಯ ಅತೀ ದೊಡ್ಡ ಪಾಲು ಅಸ್ಸಾಮಿನದಾದರೂ ಅದರ ಸಂಸ್ಕರಣಾಗಾರ ರಾಜ್ಯದಿಂದ ಹೊರಗಿದೆ. ಇಡೀ ರಾಜ್ಯದಲ್ಲಿ ಕೇವಲ ಇಪ್ಪತ್ತೋ ಮೂವತ್ತೋ ಕಿ.ಮೀ.ಗಳ

(೩ನೇ ಪುಟಕ್ಕೆ)

'ಸಪ್ತಶ್ರೀ ಹವ್ಯಾಸಿ ರಂಗ'ದ ವಾರ್ಷಿಕೋತ್ಸವ

# ಜೀವಂತವಾಗಿ ಮೂಡಿಬಂದ 'ಪತ್ರಿ ಸಂಗಪ್ಪ..'

ನರಸಿಂಹರಾಜಪುರದಲ್ಲಿ ಫೆ. ೨೭ರಂದು ನಡೆದ 'ಸಪ್ತಶ್ರೀ ಹವ್ಯಾಸಿ ರಂಗ'ದವರ ಮೊದಲ ವಾರ್ಷಿಕೋತ್ಸವ ಒಂದು ಚಿಕ್ಕ, ಚೊಕ್ಕ ಕಾರ್ಯಕ್ರಮ. ಮುಖ್ಯವಾಗಿ ರಂಗದವರು ಅಭಿನಯಿಸಿದ 'ಪತ್ರಿ ಸಂಗಪ್ಪನ ಕೊಲೆ' ಎಂಬ ಸಮಕಾಲೀನ ಸಾಮಾಜಿಕ ನಾಟಕ ಹಾಗೂ 'ದಿವ್ಯ ದರ್ಶನ' ಎಂಬ ಐತಿಹಾಸಿಕ ನಾಟಕ ಊರವರಿಗೆ ಅಪರೂಪದಲ್ಲೊಮ್ಮೆ ಶುದ್ಧ ಮನರಂಜನೆಯ ಜೊತೆಗೆ ಚಿಂತನೆಗೆ ಸರಕನ್ನೂ ನೀಡಿದವು.

ಮುಖ್ಯವಾಗಿ 'ಪತ್ರಿ ಸಂಗಪ್ಪನ ಕೊಲೆ' ಅತ್ಯುತ್ತಮವಾಗಿತ್ತು. ರಂಗದ ಸೋದರ ಸಂಸ್ಥೆಯಾದ ಸಪ್ತಶ್ರೀ ಯುವಕ ಸಂಘದವರು ಆಡಿದ ಈ ನಾಟಕಕ್ಕೆ ತಾಲ್ಲೂಕು, ಜಿಲ್ಲಾ ಹಾಗೂ ವಿಭಾಗ ಮಟ್ಟದ ಯುವಜನ ಮೇಳಗಳಲ್ಲಿ ಮೊದಲ ಬಹುಮಾನಗಳು ಬಂದಿದ್ದು, ಈಗ ರಾಜ್ಯಮಟ್ಟದಲ್ಲಿ ಆಡಲು ಆಯ್ಕೆಯಾಗಿದೆ.

ಈ ನಾಟಕ ಭದ್ರಾವತಿ ತಾ॥ನಲ್ಲಿ ೧೯೭೬ರಲ್ಲಿ ನಡೆದ ಪತ್ರಿ ಸಂಗಪ್ಪ ಎಂಬ ದಲಿತ ಜೀತಗಾರನ ಕೊಲೆಯನ್ನು ಆಧರಿಸಿದೆ. ಈಗಲೂ ಭದ್ರಾವತಿ ತಾ॥ಅ॥ಮಂ॥ ಅಧ್ಯಕ್ಷನಾಗಿರುವ ಕ್ರೂರಿ ಭೂಮಾಲೀಕ ಲೋಕೇಶಪ್ಪನ ಹತ್ತಿರ ೧೫ ವರ್ಷ ಜೀತಗಾರನಾಗಿದ್ದು, ವರ್ಷಕ್ಕೆ ಸಿಗುವ ೧೫೦ ರೂ. ಕೂಲಿಯಿಂದ ಜೀವನ ಸಾಗಿಸಲಾಗದೆ ಬೇರೆ ಜಮೀನ್ದಾರನ ಹತ್ತಿರ ಕೂಲಿಗೆ ಸೇರಿದ್ದು; ಹಾಗೂ ಲೋಕೇಶಪ್ಪ ನುಂಗಿದ್ದ ತನ್ನ ಅರ್ಧ ಎಕರೆ ಜಮೀನು ಬಿಟ್ಟು ಕೊಡುವಂತೆ ಒತ್ತಾಯಿಸಿ ಕಡೆಗೆ ಸರ್ಕಾರಕ್ಕೆ ದೂರು ಕೊಟ್ಟದ್ದು—ಈ ಕಾರಣಕ್ಕೆ ಲೋಕೇಶಪ್ಪ ಮತ್ತು ಅವನ ರಾಕ್ಷಸಗಣ ಸಂಗಪ್ಪನನ್ನು ರಾತ್ರಿ ತೆಂಗಿನ ಮರಕ್ಕೆ ಕಟ್ಟಿಹಾಕಿ, ಹಿಂಸಿಸಿ, ಬೀಜ ಹಿಸುಕಿ ಕೊಂದರು. "ತೆಂಗಿನಕಾಯಿ ಕದಿಯಲು ಬಂದು ಮರದಿಂದ ಬಿದ್ದು ಸತ್ತ" ಎಂದು ಮುಚ್ಚಿಹೋಗಲಿದ್ದ ಈ ಅಮಾನುಷ ಕೊಲೆಯನ್ನು ಕರ್ನಾಟಕ ದಲಿತ ಸಂಘರ್ಷ ಸಮಿತಿ ಬೆಳಕಿಗೆ ತಂದು, ನ್ಯಾಯಕ್ಕಾಗಿ ಒತ್ತಾಯಿಸಿ ತೀವ್ರ ಚಳುವಳಿ ನಡೆಸಿದ ಪರಿಣಾಮವಾಗಿ ಸಿಬಿಐ ತನಿಖೆ ನಡೆದಿದೆ. ಆದರೆ ಅದರ ವರದಿಯನ್ನು ಬಹಿರಂಗ ಪಡಿಸಿಲ್ಲ, ತಪ್ಪಿತಸ್ಥರನ್ನು ಶಿಕ್ಷಿಸಿಯೂ ಇಲ್ಲ.

ಈ ಘಟನೆಯ ಆಧಾರದ ನಾಟಕ ಸಪ್ತಶ್ರೀ ರಂಗದ ನಟರ ಅಭಿನಯದಲ್ಲಿ ಜೀವಂತವಾಗಿ ಮೂಡಿಬಂತು. ನಾಟಕ ಪ್ರಯೋಗಾತ್ಮಕವಾಗಿದ್ದು, ಅಡಿಕೆ ಮರ, ಕುರ್ಚಿ, ಮೇಜು, ಬಾಗಿಲು ಮುಂತಾದುವನ್ನೆಲ್ಲ ಮನುಷ್ಯರೇ ಸಂಕೇತಿಸುತ್ತಾರೆ. ಆದರೆ ನಾಟಕ ಪ್ರೇಕ್ಷಕರಿಗೆ ಸ್ಪಷ್ಟವಾಗಿ ಅರ್ಥವಾಗಿದ್ದಲ್ಲದೆ ಪೂರ್ತಿಯಾಗಿ ಅವರ ಮೆಚ್ಚಿಗೆಗೆ




ಪಾತ್ರವಾಯಿತು. ಎಲ್ಲೂ ತಡವರಿಸದೆ ಮೇಕಪ್ ಇಲ್ಲದೆ ಅಭಿನಯಿಸಿದ ರಂಗದ ಕಲಾವಿದರಲ್ಲಿ (೧೮ ಮಂದಿ) ಯಾರು ಹೆಚ್ಚು, ಯಾರು ಕಡಿಮೆ ಎನ್ನಲು ಆಗದಂತೆ ಎಲ್ಲರೂ ಉತ್ತಮ ಅಭಿನಯ ನೀಡಿದರು.

ನಾಟಕಗಳಿಗೆ ಮೊದಲು ನಡೆದ ವಿವಿಧ ವಿನೋದಾವಳಿ ಹಾಗೂ ಪುಟ್ಟ ಮಕ್ಕಳ ನೃತ್ಯಗಳೂ ಕೂಡ ರಂಜನೆ ನೀಡಿದವು. ಆದರೆ 'ಮಹನೀಯ'ರೊಬ್ಬರ ಹಡೆ ಜೋಕೊಂದು ಎಲ್ಲರ ತಿರಸ್ಕಾರಕ್ಕೆ ಪಾತ್ರವಾಯಿತು. ಇಡೀ ಕಾರ್ಯಕ್ರಮದಲ್ಲಿ ಇದೊಂದು ಕಪ್ಪು ಚುಕ್ಕೆಯಾಗಿತ್ತು

ಪ್ರಾರಂಭದಲ್ಲಿ ನಡೆದ ಸಮಾರಂಭದ ಅಧ್ಯಕ್ಷತೆಯನ್ನು ಎಂ. ಪಿ. ಗೋವಿಂದೇಗೌಡರು ವಹಿಸಿದ್ದರು. ಮುಖ್ಯ ಅತಿಥಿಯಾಗಿದ್ದ ಖ್ಯಾತ ಲೇಖಕ ಭದ್ರಾವತಿ ಕ. ಉ. ಕಾರ್ಖಾನೆಯ ನೌಕರ ಬಿ.ರಾಜಣ್ಣ ಕಲೆ, ಸಾಹಿತ್ಯ ಜನರನ್ನು ತಲುಪಬೇಕಾದ ಅಗತ್ಯವನ್ನು ಸ್ಪಷ್ಟಪಡಿಸುತ್ತಾ, ಜನರಿಗೆ ಅರ್ಥವಾಗದ, ಪ್ರಚೋದನೆ ನೀಡದ ಕಲೆ, ಸಾಹಿತ್ಯ ವಿದ್ವಾಂಸರಿಂದ ಎಷ್ಟೇ ಶಹಭಾಸ್‌ಗಿರಿ ಪಡೆದರೂ ಅದು ವ್ಯರ್ಥವೆಂದು ಅಭಿಪ್ರಾಯಪಟ್ಟರು. ಇದೇ ಸಂದರ್ಭದಲ್ಲಿ ತಾ॥ನಲ್ಲಿ ರಂಗ ಭೂಮಿಗಾಗಿ ಬಹಳ ಕಾಲ ದುಡಿದ ನಿರ್ಮಲಕುಮಾರ ಶಾಸ್ತ್ರಿ ಹಾಗೂ ಹೆಚ್. ಎಸ್. ಶಿವಸ್ವಾಮಿ ಅವರುಗಳನ್ನು ಸನ್ಮಾನಿಸಲಾಯಿತು.

ಸ್ವಾಗತ: ರಘುಪತಿ ತುಂಗ, ಅತಿಥಿಗಳ ಪರಿಚಯ ಮತ್ತು ವರದಿ: ಬಿ.ಎಂ.ಜ್ವಾಲನಪ್ಪ, ಅಭಿನಂದನಾ ಭಾಷಣ: ನ. ಸು. ರವಿಶಂಕರ್ ಹಾಗೂ ನಂದನಾಪರ್ಣೆ: ಪ್ರಭಾಕರ್ ಅವರಿಂದ ನಡೆದವು.

# ಹರಿಕಥೆಯಲ್ಲಿ ಮಿಂಚಿದ ಪ್ರತಿಮಾದೇವಿ

ಫೆ. ೨೮ರಂದು ಕೊಪ್ಪದ ಆ.ನ.ಕಲ್ಯಾಣ ಮಂಟಪದಲ್ಲಿ ಹನುಮದ್ದರ್ಶನ ಎಂಬ ಕಥಾಭಾಗದ ಹರಿಕಥೆ ಮಾಡಿದ ಕು॥ ಪ್ರತಿಮಾದೇವಿ ಒಬ್ಬ ನುರಿತ ಹರಿಕಥೆಕಾರರಂತೆ ಸುಲಲಿತವಾಗಿ 'ಕಥೆ' ಹೇಳಿ ಕೇಳುಗರ ಮೆಚ್ಚುಗೆ ಗಳಿಸಿದರು...

ಇನ್ನೂ ಹರಿಕಥೆ ಕಲಿಯುತ್ತಿರುವ ಈಕೆ ಹೊಸನಗರ ತಾಲ್ಲೂಕಿನ ಖ್ಯಾತ ಕೋಡೂರು ಸೋದರಿಯರಲ್ಲೊಬ್ಬರು. (ಇನ್ನೊಬ್ಬರು ಕು॥ ಪಂಕಜ.) ಕಡು ಬಡತನದ ಕಷ್ಟಪಟ್ಟು ಹೇಗೋ ಪ್ರಥಮ ಬಿ.ಎ.ವರೆಗೆ ಓದಿದರು. ಮುಂದೆ ಓದುವ ಆಸೆ ಬೆಟ್ಟದಷ್ಟಿದ್ದರೂ ಬಡತನದಿಂದಾಗಿ ಸಾಧ್ಯವಾಗಿಲ್ಲ.

ಕರ್ನಾಟಕದಲ್ಲೇ ಹೆಸರಾಂತ ಹರಿಕಥಾ ವಿದ್ವಾಂಸರುಗಳಾಗಬೇಕೆಂಬುದು ಈ ಸೋದರಿಯರ ಬಯಕೆ. ಅದಕ್ಕೆ ಬೇಕಾದ ಪಾಂಡಿತ್ಯ, ಆಸಕ್ತಿಗಳೂ ಇವೆ. ಸೂಕ್ತ ಪ್ರೋತ್ಸಾಹ ಸಿಕ್ಕಿದರೆ ಓದಿನಲ್ಲಿ ಈಡೇರದ ಆಸೆ ಇಲ್ಲಾದರೂ ಫಲಿಸೀತು.

**(ಮಾ.ಶೇ.ಗಣಪತಿ)**

# ಬಳಕೆದಾರರ ವೇದಿಕೆ - ಹಾಗೆಂದರೇನು?

(ಹಿಂದಿನ ಸಂಚಿಕೆಯಿಂದ)

**ಕಾರ್ಯವಿಧಾನ:** ವಿವರಣೆಯ ಅನುಕೂಲಕ್ಕಾಗಿ, ಯಾವನೋ ಒಬ್ಬ—ಪೋತಪ್ಪ ನಾಯ್ಕ – ಬಳಕೆದಾರನ ಸ್ಥಾನದಲ್ಲಿದ್ದಾನೆ ಎಂದು ಕೊಳ್ಳೋಣ. ಅವನಿಗೆ ತಹಸೀಲ್ದಾರರ ಕಛೇರಿಯಿಂದ ಒಂದು ಕೆಲಸ ಆಗಬೇಕಾಗಿ ಅತ ಅರ್ಜಿ ಕೊಟ್ಟಿದ್ದಾನೆ. ಹಲವಾರು ಬಾರಿ ತಾಲ್ಲೂಕಾಫೀಸಿಗೆ ಅಲೆದಿದ್ದಾನೆ. ಪ್ರತಿಸಲ, 'ನಾಳೆಬಾ', 'ಅವತ್ತುಬಾ, ಇವತ್ತು ಬಾ', 'ಅದಾಗಬೇಕು, ಇದಾಗಬೇಕು', 'ನಿನ್ನ ಅರ್ಜಿ ಕಳೆದು ಹೋಯಿತು. ಹೊಸ ಅರ್ಜಿ ಕೊಟ್ಟಿರು'—ಹೀಗೆ ಹಲವಾರು ಉತ್ತರಗಳು ಮಾತ್ರ ಅವನಿಗೆ ಸಿಕ್ಕಿವೆ. ನಮ್ಮ ಪೋತಪ್ಪ ನಾಯ್ಕ ಇದೆಲ್ಲದರ ಒಳಂತರ ತಿಳಿಯದ ದಡ್ಡನೇನಲ್ಲ. ಆದರೂ ಕಾನೂನು ಬದ್ಧವಾಗಿ ಆಗಬೇಕಾದ ಕೆಲಸಕ್ಕೆ, ಮಾಡಿಸಿಕೊಳ್ಳಲು ತನಗೆ ಹಕ್ಕಿರುವ ಕೆಲಸಕ್ಕೆ, ಕಷ್ಟಪಟ್ಟು ದುಡಿದ ಹಣವನ್ನು ಬೇಕಾಬಿಟ್ಟಿ ಖರ್ಚು ಮಾಡಲು ಅವನು ತಯಾರಿಲ್ಲ. ಅಥವಾ ಅವನ ಹತ್ತಿರ ಹಾಗೆಲ್ಲ ಖರ್ಚು ಮಾಡಲು ಹಣವಿಲ್ಲ.

ಈ ಹಂತದಲ್ಲಿ ಅವನು ವೇದಿಕೆಯನ್ನು ಸಂಪರ್ಕಿಸುತ್ತಾನೆ. ಯಥಾಪ್ರಕಾರ ವೇದಿಕೆ ಅವನ ಸಮಸ್ಯೆಯನ್ನು ಕೂಲಂಕಷವಾಗಿ ಅಭ್ಯಾಸ ಮಾಡುತ್ತದೆ. ಸರಿ, ಸಮಸ್ಯೆ ಇದೆ ಎಂದಾದ ಮೇಲೆ ತಹಸೀಲ್ದಾರರಿಗೆ ಹಿಂದೆ ಕೊಟ್ಟ ಅರ್ಜಿಯ ವಿಷಯ ಸಂಕ್ಷಿಪ್ತವಾಗಿ ತಿಳಿಸಿ ಮತ್ತೊಂದು ಅರ್ಜಿ ಬರೆದು ಅದರಲ್ಲಿ ತನಗೆ ಅವರು ನಿರ್ದಿಷ್ಟವಾಗಿ ಇಷ್ಟು ದಿನಗಳ ಒಳಗೆ ಉತ್ತರ ಕೊಡಬೇಕೆಂದು ಸೂಚಿಸಲು ವೇದಿಕೆ ಅವನಿಗೆ ತಿಳಿಸುತ್ತದೆ. ಹಾಗೆ ತಹಸೀಲ್ದಾರರಿಗೆ ಸಲ್ಲಿಸಿದ ಅರ್ಜಿಯ ಯಥಾಪ್ರತಿಗೆ ಅವರಿಂದ ಸಹಿ ಪಡೆದ ದಾಖಲೆಗಾಗಿ ಇಟ್ಟುಕೊಳ್ಳಬೇಕು. ಮತ್ತು ಇನ್ನೊಂದು ಯಥಾ ಪ್ರತಿಯನ್ನು ಬಳಕೆದಾರರ ವೇದಿಕೆಗೆ ಕೊಡಬೇಕು.

ತಹಸೀಲ್ದಾರರಿಂದ ನಿರ್ದಿಷ್ಟ ಅವಧಿಯೊಳಗೆ ಉತ್ತರ ಬಾರದಿದ್ದರೆ ಅವರ ಮೇಲಿನ ಅಧಿಕಾರಿಗಳಿಗೆ ಮೇಲೆ ಹೇಳಿದ ಕ್ರಮದಲ್ಲೇ ಅರ್ಜಿ ಬರೆಯಬೇಕು. ಇದು ಅಂತಿಮವಾಗಿ ಮುಖ್ಯಮಂತ್ರಿಗಳವರೆಗೆ ಹೋಗುತ್ತದೆ. ಈ ಘಟ್ಟದಲ್ಲೂ ಉತ್ತರ ಬರಲಿಲ್ಲವಾದರೆ ಪ್ರಕರಣವನ್ನು ನ್ಯಾಯಾಲಯಕ್ಕೆ ಒಯ್ಯಲಾಗುತ್ತದೆ. ಮತ್ತು ಇದಕ್ಕಾಗಿ ವೇದಿಕೆ ಬಳಕೆದಾರನಿಗೆ ಎಲ್ಲ ರೀತಿಯ ಸಹಕಾರವನ್ನೂ ಕೊಡುತ್ತದೆ. (ಆದರೆ ಸಾಮಾನ್ಯವಾಗಿ ಅಷ್ಟರಲ್ಲಿ ಸಮಸ್ಯೆ ಬಗೆಹರಿದಿರುತ್ತದೆ.)

**ನಮ್ಮ ಮುಂದಿರುವ ಕೆಲವು ಉದಾಹರಣೆಗಳು:** ಬಳಕೆದಾರರ ಈ ರೀತಿಯ ಚಟುವಟಿಕೆಗಳು ದಕ್ಷಿಣ ಕನ್ನಡದಲ್ಲಿ ಅದರಲ್ಲೂ ವಿಶೇಷವಾಗಿ ಉಡುಪಿಯಲ್ಲಿ ತುಂಬ ಬಿರುಸಾಗಿ ನಡೆಯುತ್ತಿವೆ. ಕೊಪ್ಪದಲ್ಲಿ ಇತ್ತೀಚೆಗೆ ನಡೆದ ವೇದಿಕೆಯ ಪರಿಚಯ ಸಭೆಯಲ್ಲಿ ಮಾತನಾಡುತ್ತ ಉಡುಪಿ ಬಳಕೆದಾರರ ವೇದಿಕೆಯ ಸಂಚಾಲಕರು, ಪ್ರಾರಂಭವಾದ ಮೂರು ವರ್ಷಗಳಲ್ಲಿ ವೇದಿಕೆಯು ಸುಮಾರು ಆರುನೂರು ಸಮಸ್ಯೆಗಳಿಗೆ ಪರಿಹಾರ ಕಂಡಿದೆ ಎಂದು ತಿಳಿಸಿದ್ದಾರೆ. ಮನೆ ಕಟ್ಟಲು ಸರಕಾರ ಕೊಡುವ ಹಣವನ್ನು ಪೈಸೆಯನ್ನೂ ಸರಕಾರಿ ಅಧಿಕಾರಿಗಳಿಗೆ ಕೊಡದೆ, ಪೂರ್ತಿಯಾಗಿ ಪಡೆದು ಮನೆ ಕಟ್ಟಿಕೊಂಡವರಿದ್ದಾರೆ. ೧೨-೧೩ ವರ್ಷ ಸತತವಾಗಿ ತಾಲ್ಲೂಕಾಫೀಸಿಗೆ ಅಲೆದೂ ಮಾಡಿಸಿಕೊಳ್ಳಲಾಗದ ಕೆಲಸ ವೇದಿಕೆಯ ಮೂಲಕ ಆಗಿದ್ದಿದೆ. ನೂರಾರು ಉಪಾಧ್ಯಾಯರಿಗೆ ಸಂಬಂಧಿಸಿದ, ಒಟ್ಟು ಮೊತ್ತದಲ್ಲಿ ಲಕ್ಷಾಂತರ ರೂ.ಗಳಿಗೂ ಮೀರಿದ ವ್ಯವಹಾರವೊಂ

(೩ನೇ ಪುಟಕ್ಕೆ)

# ಅಸ್ಸಾಂ ನರಮೇಧ

(೨ನೇ ಪುಟದಿಂದ)

ಸ್ಟು ಮಾತ್ರ ರೈಲು ಮಾರ್ಗವಿದೆ, ಇತ್ಯಾದಿ, ಇತ್ಯಾದಿ.

ಹೀಗೆ ಎಲ್ಲ ರಂಗದಲ್ಲೂ ಹಿಂದೆ ಸರಿಸಲ್ಪಟ್ಟು, ಕಡೆಗೆ ಚುನಾವಣೆಯ ಮೂಲಕ ತಮ್ಮ ಭವಿಷ್ಯ ನಿರ್ಧಾರ ಮಾಡುವವರೂ ಈ ಹೊರಗಿನವರೇ ಎಂಬ ಮಟ್ಟಕ್ಕೆ ಬೆಳೆದಾಗ, ಒಳಗೇ ಹೊಗೆಯಾಡುತ್ತಿದ್ದ ಅಸ್ಸಾಮೀಯರ ಅಸಮಾಧಾನ ಭುಗಿಲೆದ್ದಿತು. ಅಸ್ಸಾಮಿನಲ್ಲಿ ಪರಕೀಯರನ್ನು, ಅದರಲ್ಲೂ ಮುಖ್ಯವಾಗಿ ಭಾರತೀಯರಲ್ಲದವರನ್ನು ಗುರ್ತಿಸಿ ಅವರನ್ನು ಹೊರಗೆ ಕಳಿಸಬೇಕು, ಆನಂತರವೇ ಚುನಾವಣೆ ನಡೆಯಬೇಕುಎಂಬ ಬೇಡಿಕೆಯೊಂದಿಗೆ ಪ್ರಾರಂಭವಾದ ಚಳುವಳಿ ಕ್ಷಣಾರ್ಧದಲ್ಲಿ ರಾಜ್ಯಾದ್ಯಂತ ಹಬ್ಬಿತು. (೮ ಲಕ್ಷ ನೇಪಾಳೀಯರು, ೨೦ ಲಕ್ಷ ಬಾಂಗ್ಲಾದೇಶೀಯರು ಅನಧಿಕೃತವಾಗಿ ಅಸ್ಸಾಮಿನಲ್ಲಿದ್ದಾರೆಂದು ಅಂದಾಜು.)

ಪ್ರಾರಂಭದಲ್ಲಿ ಚಳುವಳಿಯನ್ನು ಉಪೇಕ್ಷೆಮಾಡಿ, ಬಲ ಪ್ರಯೋಗದಿಂದ ಹತ್ತಿಕ್ಕಲು ಯತ್ನಿಸಿದ ಕೇಂದ್ರ ಸರ್ಕಾರ ಕಡೆಗೂ ಸಮಸ್ಯೆಯನ್ನು ಒಪ್ಪಿಕೊಳ್ಳಬೇಕಾಯಿತು. ಆದರೆ ಬ್ರಿಟಿಷರಿಂದ ಕಲಿತ ಪಾಠಗಳನ್ನೇ ಅನುಸರಿಸುತ್ತಿರುವ ಸರ್ಕಾರ ನೇರವಾಗಿ ಸಮಸ್ಯೆಯನ್ನು ಪೂರ್ತಿ ಅರ್ಥಮಾಡಿಕೊಂಡು ಬಗೆ ಹರಿಸುವ ಬದಲು ಪಕ್ಷದ ಲಾಭಕ್ಕಾಗಿ ಕುತಂತ್ರಗಳನ್ನು ಶುರು ಮಾಡಿದ್ದಲ್ಲದೆ ಚಳುವಳಿಯ ಬಗ್ಗೆ ಸುಳ್ಳು ಪ್ರಚಾರವನ್ನು ನಡೆಸಿತು.

### ಬೇಡಿಕೆಯೇನು?

ಚಳುವಳಿಯು ಕಾವು ಸಂಘಾನ, ಮಾತುಕತೆ ಮುಂತಾದುವುಗಳಿಗಾಗಿ ಸ್ವಲ್ಪ ತಗ್ಗಿದ್ದಾಗ ಚಳುವಳಿಕಾರರ ಪ್ರತಿನಿಧಿಗಳು ದೇಶಾದ್ಯಂತ ಪ್ರವಾಸ ಮಾಡಿ ತಮ್ಮ ನಿಲುವು, ಬೇಡಿಕೆಗಳ ಬಗ್ಗೆ ವಿವರಿಸಲು ಪ್ರಯತ್ನ ಪಟ್ಟರು.

ರಾಜ್ಯದಲ್ಲಿರುವ 'ವಿದೇಶೀ ಪ್ರಜೆ'ಗಳನ್ನು ಗುರ್ತಿಸಿ ಅವರನ್ನು ಹಿಂದಕ್ಕೆ ಕಳಿಸಬೇಕೆಂಬುದು ಅಸ್ಸಾಮೀಯರ ಮುಖ್ಯ ಬೇಡಿಕೆ. ಇದಕ್ಕೆ ೧೯೫೧ ಆಧಾರ ವರ್ಷವಾಗಬೇಕೆಂದು ಹಲವು ಸಂಗತಿಗಳ ಆಧಾರದ ಮೇಲೆ ಅವರು ಹೇಳುತ್ತಾರೆ. ೧೯೭೧ (ಬಾಂಗ್ಲಾ ದೇಶ್ ಯುದ್ಧಾನಂತರ) ಆಧಾರ ವರ್ಷವಾಗ ಬೇಕೆಂದು ಕೇಂದ್ರ ಸರ್ಕಾರದ ಪಟ್ಟು. ಕೊನೆಗೆ ಅಸ್ಸಾಮೀಯರು ಒಪ್ಪಿಕೊಂಡ ಒಂದು ರಾಜೀಸೂತ್ರದಂತೆ, 'ವಿದೇಶೀ ಪ್ರಜೆಗಳನ್ನು ಗುರ್ತಿಸಲು ಆಧಾರ ವರ್ಷ ೧೯೫೧ ಆಗಬೇಕು; ಆದರೆ ೭೧ರ ನಂತರ ಬಂದವರಿಗೆ ಕೇಂದ್ರ ಸರ್ಕಾರ ಬೇರೆ ವ್ಯವಸ್ಥೆ ಮಾಡಿದರೆ ೧೯೫೧–೭೧ರ ನಡುವಿನವರು ಅಸ್ಸಾಮಿನಲ್ಲಿ ಉಳಿಯಬಹುದು. (೭೧ರ ನಂತರದವರನ್ನು ಹೊರ ಸಾಗಿಸಲು ಕೇಂದ್ರ ಹೇಗೂ ಸಿದ್ಧವಿತ್ತಲ್ಲ.) ಆದರೆ ಕೇಂದ್ರ ಸರ್ಕಾರ ಈ ಯಾವ ಸೂತ್ರಕ್ಕೂ ಒಪ್ಪದೆ ತನ್ನ ಪಟ್ಟನ್ನು (೧೯೭೧) ಭದ್ರವಾಗಿ ಕಚ್ಚಿ ಕೊಂಡಿದೆ.

ಇದು ಅಸ್ಸಾಂ ಸಮಸ್ಯೆಯ ಮುಖ್ಯ ತಿರುಳು. ಈ ಬೇಡಿಕೆಗೆ ಅಸ್ಸಾಮಿಗಳು **ಭಾರತ ಸಂವಿಧಾನದ ವಿಧಿ–ನಿಯಮಗಳನ್ನೇ ಆಧಾರವಾಗಿಟ್ಟು, ಅದರ ಚೌಕಟ್ಟಿನಲ್ಲೇ** ಸಮಸ್ಯೆ ಬಗೆಹರಿಸಬೇಕೆನ್ನುತ್ತಿದ್ದಾರೆ. ತಮ್ಮ ಚಳುವಳಿಗೆ ಅವರು ಅನುಸರಿಸುತ್ತಿರುವುದು ಗಾಂಧೀ ಮಾರ್ಗ—ಅಹಿಂಸೆ, ಅಸಹಕಾರದ ಮೂಲಕ ಮನವೊಲಿಸುವ ಮಾರ್ಗ. ಆದರೆ ಇದಕ್ಕೆ ಕೇಂದ್ರ ಸರ್ಕಾರದ ಉತ್ತರ? ಬ್ರಿಟಿಷರು ಭಾರತ ಸ್ವಾತಂತ್ರ್ಯ ಚಳುವಳಿಗೆ ನೀಡಿದ ಉತ್ತರ. ಭಾರತೀಯರು ತಮ್ಮ ನಾಡಿಗೆ **ಪೂರ್ಣ** ಸ್ವಾತಂತ್ರ್ಯ ಕೇಳಿದ್ದರು; ಅಸ್ಸಾಮೀಯರು **ಭಾರತ ಸಂವಿಧಾನದ ಚೌಕಟ್ಟಿನೊಳಗೇ** ತಮ್ಮ ಆಗು–ಹೋಗು ನಿರ್ಧರಿಸುವ ತಮ್ಮ ಹಕ್ಕನ್ನಷ್ಟೇ ಕೇಳುತ್ತಿದ್ದಾರೆ—ಎಂಬ ವ್ಯತ್ಯಾಸವನ್ನು ಮಾತ್ರ 'ನಮ್ಮ' ಸರ್ಕಾರ ಅರ್ಥ ಮಾಡಿಕೊಳ್ಳುತ್ತಿಲ್ಲ.

### ಹಿಂಸೆ ಹೇಗೆ?

ಚಳುವಳಿಕಾರರು ಅಹಿಂಸಾ ಮಾರ್ಗ ಅನುಸರಿಸಿದ್ದರೆ ಹಿಂಸೆ ನಡೆಯಲು ಕಾರಣ

(೮ನೇ ಪುಟಕ್ಕೆ)

## 'ತಳ್ಳಿ ಅರ್ಜಿ'ಗಳು

ನಮ್ಮ ಹಳ್ಳಿಗಳಲ್ಲಿ ತಳ್ಳಿ ಅರ್ಜಿ ಅಥವಾ ಮೂಗರ್ಜಿಗಳು ಬಹಳ ಜಾಸ್ತಿ. ಯಾವುದಾದರೊಂದು ಕಾರ್ಯ ಮಾಡಿದಾಗ ಹೊಟ್ಟೆ ಕಿಚ್ಚಿನಿಂದ ಊರಿನಲ್ಲಿ ವಿಚಾರಿಸದೆ ಸರ್ಕಾರಿ ಅಧಿಕಾರಿಗಳಿಗೆ ತಳ್ಳಿ ಅರ್ಜಿ ಬರೆದು ಬಿಡುತ್ತಾರೆ. ಇಂಥ ಜನರನ್ನು ಹತೋಟಿಗೆ ತರುವುದೂ ಕಷ್ಟ. ಇದರಿಂದ ಸರ್ಕಾರಕ್ಕೂ ವೃಥಾ ಜೀಪಿನ ಪೆಟ್ರೋಲ್ ಖರ್ಚು. ಸರ್ಕಾರಿ ಅಧಿಕಾರಿಗಳು ತಳ್ಳಿ ಅರ್ಜಿ ಕಂಡೊಡನೆ ಜೀಪಿನಲ್ಲಿ ಬಂದು, ಸಣ್ಣ ಪುಟ್ಟ ಕೆಲಸ ಮಾಡಿದವರನ್ನು ಬೆದರಿಸಿ ಬಂದಷ್ಟು ಹಣ ಕಿತ್ತುಕೊಂಡು ಹೋಗುತ್ತಾರೆ. ತಳ್ಳಿ ಅರ್ಜಿ ಮಾಡಿದವರು ಯಾವುದಕ್ಕೂ ಮುಂದೆ ಬರುವುದಿಲ್ಲ.

ಹೀಗೆ ಒಬ್ಬರಿಂದಾಗಿ ಎಲ್ಲರಿಗೂ ತೊಂದರೆ. ಇದನ್ನು ಯಾಕೆ ಮಾಡುತ್ತಾರೆಂದು ಹೇಳುವುದಕ್ಕೆ ಸಾಧ್ಯವಿಲ್ಲ. ಸಣ್ಣ ಪುಟ್ಟ ಕೆಲಸಕ್ಕೆಲ್ಲ ಹೀಗೆ ಯಾಕೆ ಅಧಿಕಾರಿಗಳಿಗೆ ನೂರಿನ್ನೂರು ರೂ. ಖರ್ಚುಮಾಡಬೇಕು? ಇದನ್ನು ನಾವೇ ಬಗೆಹರಿಸಿಕೊಳ್ಳಬಹುದಲ್ಲ. ಓದುಗರು ಈ ಬಗ್ಗೆ ಯೋಚಿಸಬೇಕು.

—**ಡಿ.ವೈ.ರಾಮಚಂದ್ರ,**
ಕಲ್ಲುಗದ್ದೆ.

## ಬಳಕೆದಾರರ ವೇದಿಕೆ

(೨ನೇ ಪುಟದಿಂದ)

ದು ಹನ್ನೆರಡು ವರ್ಷಗಳಿಗೂ ಮೀರಿ ಕಳೆದಿತ್ತು, ವೇದಿಕೆಯ ಮೂಲಕ ಸುಪ್ರೀಂ ಕೋರ್ಟಿನಲ್ಲಿ ಕೇವಲ ಒಂದೂವರೆ ತಿಂಗಳಿನಲ್ಲಿ ಬಳಕೆದಾರರ ಪರವಾಗಿ ಇತ್ಯರ್ಥವಾಗಿದೆ.

(ಮುಂದುವರಿಯುವುದು)

## ಓದುಗರ ಪತ್ರಗಳು

### "ಸ್ವಾಗತ ಸಮಿತಿ ಅಧ್ಯಕ್ಷರ ಉತ್ತರದಿಂದ ಸಮಾಧಾನ

ಮಾನ್ಯರೆ,

ನಮ್ಮ ಪತ್ರಕ್ಕೆ ("ಧರ್ಮದ ಹೆಸರಲ್ಲಿ ವರ್ತಕರ ಸುಲಿಗೆ?" — ೨೭–೨–೮೩) ಶ್ರೀಯುತ ಎ್.ಎಸ್.ಚಂದ್ರಶೇಖರ್‌ರವರು ಕೊಟ್ಟಿರುವ ಸ್ಪಷ್ಟೀಕರಣದಿಂದ ನಮಗೆ ಸಂತೋಷ ಹಾಗೂ ಸಮಾಧಾನವಾಗಿದೆ.

ಅಧಿಕಾರಿಗಳು ಸೇವಾಕಾಂಕ್ಷೆಯಿಂದ ಹಾಗೂ ಸಮಿತಿಯವರ ಕೋರಿಕೆಯಂತೆ ಚಂದಾ ಸಂಗ್ರಹಣೆಗೆ ಬಂದರೂ ಸಹ ಜನಸಾಮಾನ್ಯರ ಪಾಲಿಗೆ ಅವರು ದೊಣ್ಣೆಯಾಗಿಯೇ ಕಾಣುತ್ತಾರೆ. ಅವರನ್ನು ಜೊತೆಗೆ ಕರೆದು ಕೊಂಡು ಬಂದ ಸಮಿತಿಯವರು ದೊಣ್ಣೆ ಹಿಡಿದು ಬಂದಂತೇ ಕಾಣುತ್ತಾರೆ. ಅಂದ ಮೇಲೆ ಪ್ರತ್ಯೇಕವಾಗಿ ತೊಂದರೆ ಕೊಡುವುದಾಗ, ಬಾಯಿ ಬಿಟ್ಟು ಬೆದರಿಕೆ ಹಾಕುವುದೂ ಅಗತ್ಯವೇ ಆಗುವುದಲ್ಲ. ಏಕೆಂದರೆ ಮೊದಲೇ ಹೇಳಿದಂತೆ ಪ್ರತಿಯೊಬ್ಬರಲ್ಲೂ ಚಿಕ್ಕ–ಪುಟ್ಟ ನ್ಯೂನತೆಗಳು ಇದ್ದೇ ಇರುತ್ತವೆ. ಈಗಿನ ಕಾನೂನಿಗೆ ಯಥಾವತ್ ನಡೆದುಕೊಳ್ಳುವುದು ಯಾರಿಂದಲೂ ಸಾಧ್ಯವಿಲ್ಲ–ಎಂಬೀ ಅಂಶಗಳನ್ನು **ನಮ್ರತೆಗೆ** ಸಮಿತಿಯವರ ಗಮನಕ್ಕೆ ತರುತ್ತಿದ್ದೇವೆ.

ನಮ್ಮ ಸಮಸ್ಯೆ ಅರಿತುಕೊಂಡ ಸಮಿತಿಯ ಅಧ್ಯಕ್ಷರಿಗೂ, ವಿಷಯವನ್ನು ವಿಮರ್ಶೆಗೆ ಎತ್ತಿಕೊಟ್ಟ 'ಮುಂಜಾವು' ಪತ್ರಿಕೆಗೂ ಅನಂತ ವಂದನೆಗಳು.

—**ನೊಂದ ವರ್ತಕರು.** ಶೃಂಗೇರಿ.

# ಅಸ್ಸಾಂ ನರಮೇಧ

(೩ನೇ ಪುಟದಿಂದ)

ವೇನು? ಎಂಬ ಪ್ರಶ್ನೆ ಏಳುತ್ತದೆ. ಅದಕ್ಕೆ ಹಲವಾರು ಕಾರಣಗಳಿವೆ.

ಮೊದಲನೆಯದು ಹಾಗೂ ಅತಿವ್ಯಾಪಕವಾದದ್ದು ಸರಕಾರಿ ಹಿಂಸೆ. ಚಳುವಳಿಕಾರ ವಿದ್ಯಾರ್ಥಿಗಳ ಪ್ರಯೋಗದ ಪೆಟ್ಟಿಗೆಗಳಲ್ಲಿದ್ದ ಚಾಕು-ಕತ್ತರಿಗಳು, ಅವರ ರೇಜರ್‌ಗಳನ್ನೂ ಸಹ "ಮಾರಕಾಸ್ತ್ರ"ಗಳೆಂದು ಹೆಸರಿಸಿ ಅವರನ್ನೆಲ್ಲ ರಾಷ್ಟ್ರೀಯ ಭದ್ರತಾ ಕಾಯ್ದೆಯನ್ವಯ ಬಂಧಿಸಿದ್ದು, ಗೋಲೀಬಾರ್‌ಗಳು, ಪತ್ರಿಕಾ ಸೆನ್ಸಾರ್ ಸಂಘ ಕರಾಳ ಕ್ರಮಗಳು ಒಂದು ಅಧ್ಯಾಯ.

ಕೋಮು ಹಿಂಸಾಚಾರ ಎರಡನೆಯದು. ಮೊದಲೇ ಹೇಳಿದಂತೆ, 'ಈ ಚಳುವಳಿ ಮುಸ್ಲಿಮರ ವಿರುದ್ಧವಾದದ್ದು, ಅವರನ್ನು ಹಿಂದಕ್ಕೆ ಓಡಿಸಬೇಕು; ವಿದೇಶೀಯ ಹಿಂದೂಗಳನ್ನು (ನೇಪಾಳೀಯರು, ಬಾಂಗ್ಲಾ ಹಿಂದುಗಳು) ಇಲ್ಲೇ ಉಳಿಸಿಕೊಳ್ಳಬೇಕು' — ಎಂಬರ್ಥದ ಪ್ರಚಾರ ದೇಶಾದ್ಯಂತ ನಡೆದಿದೆ. ಈ ಚಳುವಳಿಯ ಮುಸುಕಿನಲ್ಲಿ ಇಂಥ ಕೋಮುಹಿಂಸಾ ಶಕ್ತಿಗಳು ಪ್ರಚೋದಿಸಿ, ಹರಿಯಬಿಟ್ಟಿರುವ ಹಿಂಸೆ ಕಮ್ಮಿಯೇನಲ್ಲ.

ಇನ್ನೊಂದು ಗಮನಾರ್ಹ ಕಾರಣವೆಂದರೆ ಚಳುವಳಿ ನಡೆಸುವ ಶಕ್ತಿಗಳಲ್ಲೇ ಒಂದು ಭಾಗ ಕ್ರಮೇಣ ಅಹಿಂಸೆಯ ನಿರುಪಯುಕ್ತತೆ ಮನಗಂಡು ಹಿಂಸೆಯಿಂದಾದರೂ ತಮ್ಮ ಉದ್ದೇಶ ಸಾಧನೆಗೆ ಹೊರಡುವುದು. ಭಾರತೀಯ ಸ್ವಾತಂತ್ರ್ಯ ಚರಿತ್ರೆಯಲ್ಲೂ, ಕ್ರಾಂತಿಕಾರಿ ಸ್ವಾತಂತ್ರ್ಯ ಹೋರಾಟಗಾರರು ತಾಯಿನಾಡಿನ ಕ್ರೂರ ದಾಸ್ಯದ ಬಿಡುಗಡೆಗಾಗಿ ಹಿಂಸಾ ಮಾರ್ಗ ಅನುಸರಿಸಿದ್ದರಿಂದ ಮಾತ್ರ ಬ್ರಿಟಿಷರು ತಾವಿನ್ನು ಇಲ್ಲಿ ಇರುವುದು ಸಾಧ್ಯವಿಲ್ಲ ಎಂದು ಮನಗಂಡರೆಂಬುದು ನಿರ್ವಿವಾದ. ಆದರೆ ಭಾರತ ಸಂವಿಧಾನದ ಚೌಕಟ್ಟಿನೊಳಗೇ ನಡೆಯುತ್ತಿರುವ ಚಳುವಳಿಯಲ್ಲೂ ಈ ಮಾರ್ಗಕ್ಕೆ ಪ್ರಚೋದನೆ ದೊರೆತುದಕ್ಕೆ ಸಂಪೂರ್ಣ ಹೊಣೆ ನಿರ್ಲಜ್ಜ, ಬೇಜವಾಬ್ದಾರ ಕೇಂದ್ರ ಸರ್ಕಾರದ್ದು ಮಾತ್ರ.

ಇದರ ಜೊತೆಗೆ, ಯಾವುದೇ ಚಳುವಳಿ ಉದ್ಭವಾದಂತೆಲ್ಲ ಸಮಾಜ ಘಾತಕ ಶಕ್ತಿಗಳು ಅದರ ದುರ್ಲಾಭ ಪಡೆಯುವುದು ಸರ್ವೇಸಾಮಾನ್ಯ. ಹೀಗೆ, ಅಪ್ರಬುದ್ಧ ಪ್ರತ್ಯೇಕತಾವಾದಿಗಳು, ಭಾರತವನ್ನು ಮುಸ್ಲಿಂ ದೇಶವಾಗಿ ಮಾಡುತ್ತೇವೆನ್ನುವವರು, ದರೋಡೆಕಾರರು ಮುಂತಾದ ಎಲ್ಲರೂ ಬೆಂಕಿಗೆ ಇನ್ನಷ್ಟು ತುಪ್ಪ ಸುರಿದು ತಮಗೆ ಬೇಕಾದ್ದು ದೋಚಲು ಯತ್ನಿಸಿದ್ದರೆ ಆಶ್ಚರ್ಯವಿಲ್ಲ.

ಇನ್ನೂ ಒಂದು ಅಂಶವಿದೆ. ಆದರೆ ಇದು ವಿವಾದಾತ್ಮಕ. ಅದೆಂದರೆ, ಯಾವುದೇ ಅಹಿಂಸಾತ್ಮಕ ಚಳುವಳಿಯನ್ನು ಹತ್ತಿಕ್ಕಲು ಸರ್ಕಾರವೇ (ಅಥವಾ ಖಾಸಗಿಯಾದರೆ, ಮಾಲೀಕ ವರ್ಗವೇ) ಹಿಂಸೆ ಹುಟ್ಟಿಸುವುದು. ಉದಾಹರಣೆಗೆ ನಾಲ್ಕೈದು ಸಾವಿರ ಚಳುವಳಿಕಾರರು ಸೇರಿ ಪ್ರದರ್ಶನ ನಡೆಸಿದರೂ ಒಂದೂ ಕಲ್ಲು ಬೀಳದಿದ್ದರೆ ಪೋಲೀಸರೇ ಗುಂಪಿನೊಳಗಿಂದ ಯಾರ ಕೈಯಿಂದಾದರೂ ಒಂದೆರಡು ಕಲ್ಲು ತೂರಿಸಿ ಲಾಠಿ ಪ್ರಹಾರಕ್ಕಿಳಿಯುವುದು. ಇಂಥದನ್ನು ಇತ್ತೀಚೆಗೆ ಎಲ್ಲಾ ಕಡೆ ಕಾಣುತ್ತಿದ್ದೇವೆ. ಅಸ್ಸಾಂ ಚಳುವಳಿಯಲ್ಲೂ ಈ ದೂರು ಗಂಭೀರ ರೀತಿಯಲ್ಲಿದೆ. ಜೊತೆಗೆ ಸಣ್ಣ ಘಟನೆಯನ್ನೂ ದೊಡ್ಡದು ಮಾಡಿ, 'ಚಳುವಳಿಕಾರರು ಘೋರ ಹಿಂಸೆಗಿಳಿದಿದ್ದಾರೆ' ಎಂದು ಪ್ರಚಾರ ಪಡಿಸುವ ಕುತಂತ್ರವೂ ಇದೆಯೆಂದು ವರದಿಗಳು ಹೇಳುತ್ತವೆ.

ಹೀಗೆ ಸರಳವಾದ ಒಂದು ಸಮಸ್ಯೆಯನ್ನು ಸಂವಿಧಾನದ ಚೌಕಟ್ಟಿನೊಳಗೇ ಬಗೆಹರಿಸಲು ಒತ್ತಾಯಿಸುವ ಚಳುವಳಿಗೆ "ಹಿಂಸಾತ್ಮಕ", "ಪ್ರತ್ಯೇಕತಾವಾದಿ", "ದೇಶದ ಸಮಗ್ರತೆಗೆ ವಿರೋಧಿ", "ಕೋಮುವಾದಿ" ಇತ್ಯಾದಿಯಾಗಿ ಪಟ್ಟಿ ಹಚ್ಚಿ ಇವತ್ತಿನ ಈ ಘೋರ ನರಮೇಧಕ್ಕೆ ಪ್ರೇರೇಪಿಸಿದ, ಪ್ರೇರೇಪಿಸುತ್ತಿರುವ ಪ್ರತಿಯೊಬ್ಬರಿಗೂ ಧಿಕ್ಕಾರ ಹೇಳಲು ಶಬ್ದಗಳಿವೆಯೆ?

(ಸಾಧಾರ)

---

7-2-83ರಂದು ಮಧ್ಯಾಹ್ನ 2-30ಕ್ಕೆ ಕಮ್ಮರಡಿಯಿಂದ ಹಾಲ್ಮುತ್ತೂರು, ಬಂಡಿಗಡಿ, ಹರಿಹರಪುರ ಮಾರ್ಗವಾಗಿ ಕೊಪ್ಪಕ್ಕೆ ಬರುವಾಗ ದಾರಿಯಲ್ಲಿ 2,869ರೂ.ಗಳಿದ್ದ ದುಡ್ಡಿನ ಕಟ್ಟು ಬಿದ್ದು ಕಳೆದು ಹೋಗಿರುತ್ತೆ. ಸಿಕ್ಕಿದವರು 'ಮುಂಜಾವು' ವಾರ ಪತ್ರಿಕೆ ಕಾರ್ಯಾಲಯಕ್ಕೆ ತಂದು ತಲುಪಿಸಿದಲ್ಲಿ ಸೂಕ್ತ ಬಹುಮಾನ ಕೊಡಲಾಗುತ್ತೆ. ನೋಟುಗಳ ವಿವರ:

100ರ 16; 50ರ 14; 20ರ10; 10ರ 36; 5ರ 1 ಹಾಗೂ 2ರ 2 ನೋಟುಗಳು.

---

ವಿದ್ಯಾ ಮಹಿಳಾ ಸಮಾಜ (ರಿ),
ಬಾಳಗಡಿ, ಕೊಪ್ಪ.

ತಾ॥ 25-2-83ರಂದು ನಡೆದ ಲಕ್ಕಿಡಿಪ್ ಡ್ರಾದಲ್ಲಿ ಬಹುಮಾನ ಪಡೆದ ಸಂಖ್ಯೆಗಳು ಹೀಗಿವೆ.

ಮೊದಲ ಬಹುಮಾನ .... 952
2ನೇ ಬಹುಮಾನ .... 785
3ನೇ ಬಹುಮಾನ .... 481

---

ಸಪ್ತಶ್ರೀ ಹವ್ಯಾಸಿ ರಂಗ (ರಿ)
ನರಸಿಂಹರಾಜಪುರ.

ತಾ 27 - 2 - 83ರಂದು ನಡೆದ ಲಾಟರಿ ಬಹುಮಾನ ಯೋಜನೆಯಲ್ಲಿ ಬಹುಮಾನ ಪಡೆದ ಸಂಖ್ಯೆಗಳು: (1) 046; (2) 1697; (3) 982
ಸಮಾಧಾನ ಬಹುಮಾನಗಳು: 1782, 1023, 027, 1675, 1655, 140, 386; 525, 1671, 2063.

---

## ದೇವಾಲಯ ಭಕ್ತರ ಸಭೆ

ಉತ್ತಮೇಶ್ವರ: ಇಲ್ಲಿಗೆ ಸಮೀಪದ ಹೆದ್ದೆಸೆಯಲ್ಲಿರುವ ಸುಮಾರು ೧೫೦ ವರ್ಷ ಹಳೆಯ ಶಿವಪಂಚಾಯತನ ದೇವಸ್ಥಾನದ ಭಕ್ತಾದಿಗಳ ಸಭೆ ಈಚೆಗೆ ನಡೆದು, ದೇವರಿಗೆ ಮಾ. ೨೪ರಂದು ಕಲಾ ಶಾಂತಿ ಮತ್ತು ಕುಂಭಾಭಿಷೇಕ ನಡೆಸಲು ನಿಶ್ಚಯಿಸಿತು.

ಇದಕ್ಕೆ ಬೇಕಾಗುವ ಸುಮಾರು ೧೫ ಸಾವಿರ ರೂ.ಗಳನ್ನು ಸಾರ್ವಜನಿಕರಿಂದ ವಂತಿಗೆ ಸಂಗ್ರಹಿಸಬೇಕೆಂದೂ ನಿಶ್ಚಯಿಸಲಾಯಿತು. ಹರಿಹರಪುರ ಶ್ರೀಗಳನ್ನು ಸಮಾರಂಭದಲ್ಲಿ ಭಾಗವಹಿಸಲು ಆಮಂತ್ರಿಸಲಾಯಿತು.

(ವರದಿ: ಕೆ.ರಮೇಶ್)

---

ಸಂಪಾದಕ, ಮುದ್ರಕ ಮತ್ತು ಪ್ರಕಾಶಕ:
**ಸಿರಿಮನೆ ನಾಗರಾಜ್.**
ಅಚ್ಚು: ದೀವಟಿಗೆ ಅಚ್ಚುಕೂಟ, ಕೊಪ್ಪ.

---

## ಪುರಸಭಾ ಕಾರ್ಯಾಲಯ, ಕೊಪ್ಪ
**ಚಿಕ್ಕಮಗಳೂರು ಜಿಲ್ಲೆ**

1983-84ನೇ ಸಾಲಿಗೆ ಈ ಕೆಳಕಂಡ ವಿವಿಧ ಲೈಸೆನ್ಸ್‌ಗಳ ಹಕ್ಕನ್ನು ಪಡೆಯುವ ಲೀಸ್ ಆಕ್ಷನ್ ನೋಟೀಫಿಕೇಷನ್ ನಂ: ಕೆಚ್‌ಸಿ, ಪಿಆರ್ 534:82-83 ದಿನಾಂಕ 26-2-1983:—

ಸಾರ್ವಜನಿಕರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಕೊಪ್ಪ ಪುರಸಭೆಗೆ ಸೇರಿದ ಈ ಕೆಳಕಂಡ ವಿವಿಧ ಲೈಸೆನ್ಸ್ ಲೀಸ್ ಆಕ್ಷನ್ ಅನ್ನು ಮಾಹೆಯಾನ ಕಂತಿನ ರೂಪದಲ್ಲಿ ದಿನಾಂಕ 13-3-1983ರಂದು ಭಾನುವಾರ ಬೆಳಿಗ್ಗೆ 11 - 00 ಗಂಟೆಗೆ ಪುರಸಭಾ ಕಾರ್ಯಾಲಯದಲ್ಲಿ ಬಹಿರಂಗ ಹರಾಜು ಮೂಲಕ ಪುರಸಭೆಯ ಅಧ್ಯಕ್ಷರು ಯಾ ಮುಖ್ಯಾಧಿಕಾರಿಯವರಿಂದ ಈ ಕೆಳಕಂಡ ಷರತ್ತಿಗೊಳಪಟ್ಟು ವಿಲೇವಾರಿ ಮಾಡಲಾಗುವುದು. ಇಷ್ಟ ಉಳ್ಳವರು ಬಹಿರಂಗ ಹರಾಜಿನಲ್ಲಿ ಭಾಗವಹಿಸಬಹುದು.

| ಕ್ರಮ ಸಂಖ್ಯೆ | ಲೈಸೆನ್ಸ್ ಬಾಬಿನ ವಿವರ |
|---|---|
| 1) | ಮಾರ್ಕೆಟಿನ 13 ಸ್ಟಾಲುಗಳಲ್ಲಿ 83-84ನೇ ಸಾಲಿಗೆ ವ್ಯಾಪಾರ ಮಾಡುವ ಲೈಸೆನ್ಸ್ ಹಕ್ಕು |
| 2) | ಸಂತೆ ಮೈದಾನದಲ್ಲಿರುವ ಅಕ್ಕಿ ಮಳಿಗೆಗಳಲ್ಲಿ ಅಕ್ಕಿ ವ್ಯಾಪಾರ ಮಾಡುವ ಹಕ್ಕು |
| 3) | ಪುರಸಭೆಗೆ ಸೇರಿದ 3 ಮಾಂಸದ ಅಂಗಡಿಗಳನ್ನು ನಡೆಸಿಕೊಂಡು ಹೋಗುವ ಲೈಸೆನ್ಸ್ ಹಕ್ಕು |
| 4) | ಮೀನು ಮಾರ್ಕೆಟಿನಲ್ಲಿರುವ 10 ಮಳಿಗೆಗಳಲ್ಲಿ ಮೀನು ವ್ಯಾಪಾರ ಮಾಡುವ ಲೈಸೆನ್ಸ್ ಹಕ್ಕು |
| 5) | ಹಸಿಮೀನು ಸುಂಕ ವಸೂಲು ಮಾಡುವ ಲೈಸೆನ್ಸ್ ಹಕ್ಕು |
| 6) | ಸಂತೆ ಸುಂಕ ವಸೂಲುಮಾಡುವ ಲೈಸೆನ್ಸ್ ಹಕ್ಕು |
| 7) | ಪುರಸಭೆಗೆ ಸೇರಿದ ತೆಂಗಿನ ಮರದಿಂದ ಕಾಯಿಗಳನ್ನು ಕೀಳುವ ಹಕ್ಕು |
| 8) | ಪುರಸಭೆಗೆ ಸೇರಿದ 4 ಸುಂಕದಕಟ್ಟೆಯಲ್ಲಿ ಗಾಡಿ ಮತ್ತು ಸೈಕಲ್ಲುಗಳ ಮೇಲೆ ಸುಂಕ ವಸೂಲುಮಾಡುವ ಹಕ್ಕು |

**ಷರತ್ತುಗಳು**

(1) ಲೈಸೆನ್ಸ್ ಹಕ್ಕನ್ನು ಪಡೆಯಲು ಹರಾಜಿನಲ್ಲಿ ಭಾಗವಹಿಸುವವರು ಬಿಡ್ ಮಾಡುವುದಕ್ಕೆ ಮುಂಚೆ (ಅಕ್ಕಿ ಮಳಿಗೆಗಳನ್ನುಳಿದು) 500-00 ರೂಪಾಯಿ ಡಿಪಾಜಿಟ್ ಮಾಡತಕ್ಕದ್ದು

(2) ಪುರಸಭೆಗೆ ಬಾಕಿದಾರರಾಗಿರುವವರು ಬಿಡ್‌ನಲ್ಲಿ ಭಾಗವಹಿಸಲು ಅನರ್ಹರಾಗಿರುತ್ತಾರೆ.

(3) ಅಖೈರು ಬಿಡ್‌ದಾರರು 6ತಿಂಗಳ ಲೈಸೆನ್ಸ್ ಫೀಜನ್ನು ಹರಾಜು ಮೈದಾನದ ಕೂಡಲೇ ಕಟ್ಟಿ ರಶೀತಿ ಪಡೆಯತಕ್ಕದ್ದು

(4) ಉಳಿದ ಷರತ್ತು ವಿವರಗಳಿಗೆ ಈ ಕಾರ್ಯಾಲಯದಿಂದ ದಿನಾಂಕ 26-2-83ರಂದು ಹೊರಡಿಸಿರುವ ನೋಟೀಫಿಕೇಷನ್ ಕರಪತ್ರದಲ್ಲಿ ಹಾಗೂ ಪುರಸಭಾ ಕಾರ್ಯಾಲಯದಲ್ಲಿ ಪಡೆಯಬಹುದು.

(ಸಹಿ) **ಆರ್.ಗುಂಡೂರಾವ್**
ಮುಖ್ಯಾಧಿಕಾರಿಗಳು
ಪುರಸಭಾ ಕಾರ್ಯಾಲಯ,
ಕೊಪ್ಪ. (ಚಿಕ್ಕಮಗಳೂರು ಜಿಲ್ಲೆ)